

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 29-03-2021 ಪ್ರಶ್ನೆ ಸಂಖ್ಯೆ : 1998 (2336)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕಾಂತರಾಜ್ (ಬಿ.ಎಂ.ಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 29-03-2021

ಉತ್ತರಿಸುವ ಸಚಿವರು: ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ರಾಜ್ಯದಲ್ಲಿ ಖಾಸಗಿ ವಸತಿ ಶಾಲೆಗಳನ್ನು ತೆರೆಯುವ ಬಗ್ಗೆ

(ಅ) ಖಾಸಗಿ ವಸತಿ ಶಾಲೆಗಳಿಗೆ ಅನುಮತಿ ನೀಡಲು ನಿಯಮಾವಳಿಗಳಲ್ಲಿ ಅವಕಾಶವಿದೆಯೇ ;

(ಆ) ರಾಜ್ಯದಲ್ಲಿ ಖಾಸಗಿ ವಸತಿ ಶಾಲೆಗಳು ಇಲಾಖೆಯ ಅನುಮತಿ ಪಡೆದು ನಡೆಯುತ್ತಿರುವುದು ನಿಜವೇ ;

(ಇ) ಹಾಗಿದ್ದಲ್ಲಿ, ಯಾವ ಸ್ಥಳಗಳಲ್ಲಿ ಖಾಸಗಿ ವಸತಿ ಶಾಲೆಗಳು ನಡೆಯುತ್ತಿವೆ ; (ವಿವರ ನೀಡುವುದು)

(ಈ) ಧಾರವಾಡದಲ್ಲಿ 8 ರಿಂದ 10ನೇ ತರಗತಿವರೆಗೆ ಖಾಸಗಿ ಶಾಲೆ ನಡೆಸಲು 2012-13ನೇ ಸಾಲಿನಲ್ಲಿ ಆಯುಕ್ತಾಲಯವು ಅನುಮತಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ನಿಯಮಾವಳಿಗಳಲಿ ್ಲ ಅವಕಾಶವಿಲ್ಲದಿದ್ದರೂ ಖಾಸಗಿ ಶಾಲೆಗಳಿಗೆ ಅನುಮತಿ ನೀಡಿದ ಅಧಿಕಾರಿಗಳ ವಿರುದ್ಧ ಸರ್ಕಾರ ಶಿಸ್ತಿನ ಕ್ರಮ ಕೈಗೊಳ್ಳಲಿದೆಯೇ ;

(ಊ) ನಿಯಮಾವಳಿಗಳಲ್ಲಿ ಅವಕಾಶವಿಲ್ಲದಿದ್ದರೂ, ಧಾರವಾಡದಲ್ಲಿನ ಖಾಸಗಿ-ವಸತಿ ಶಾಲೆಗಳ ಪರವಾನಿಗೆ/ಅನುಮತಿ ರದ್ದುಪಡಿಸಲು ಇಲಾಖೆ ಕ್ರಮ ಕೈಗೊಳ್ಳಲಿದೆಯೇ ;

(ಋ) ಈ ಕುರಿತು ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು?